# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 300(461)
ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ. ಸಿ.ಎಂ. ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 15-09-2021
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್-19 ಸೋಂಕಿನಿಂದ ಪೋಷಕರನ್ನು ಕಳೆದುಕೊಂಡು ಅನಾಥರಾದ ಮಕ್ಕಳ ಸಂಖ್ಯೆ ಯೆಷ್ಟು; ಅಂತಹ ಮಕ್ಕಳಿಗೆ ಇದುವರೆಗೂ ಯಾವ ಸೌಕರ್ಯಗಳನ್ನು ಎಲ್ಲೆಲ್ಲಿ ಕಲ್ಪಿಸಲಾಗಿದೆ; (ಜಿಲ್ಲಾವಾರು ಸಂಪೂರ್ಣ ವಿವರ ನೀಡುವುದು) | ದಿನಾಂಕ:13-09-2021ರವಗೆ ಗುರುತಿಸಲ್ಪಟ್ಟಿರುವ ಕೋವಿಡ್-19 ಸೋಂಕಿನಿಂದ ಪೋಷಕರನ್ನು ಕಳೆದುಕೊಂಡು ಅನಾಥರಾದ ಮಕ್ಕಳ ಸಂಖ್ಯೆ:129 ಜಿಲ್ಲಾವಾರು ವಿವರ ಅನುಬಂಧ-1ರಲ್ಲಿ ಲಗತ್ತಿಸಿದೆ. ರಾಜ್ಯಾದಾದ್ಯಂತ ಅಂತಹ ಮಕ್ಕಳಿಗೆ **"ಮುಖ್ಯಮಂತ್ರಿ ಬಾಲಸೇವಾ ಯೋಜನೆ"** ಮತ್ತು **"ಬಾಲ ಹಿತೈಷಿ ಯೋಜನೆ"** ಹಾಗೂ **"PM CARES for Children"** ಗಳನ್ನು ರಾಜ್ಯ ಸರ್ಕಾರವು ಜಾರಿಗೊಳಿಸಿದೆ.<br>**ಮುಖ್ಯಮಂತ್ರಿ ಬಾಲಸೇವಾ ಯೋಜನೆಯ ಸೌಲಭ್ಯಗಳು:-**<br>➢ ಕೋವಿಡ್-19 ಕಾರಣದಿಂದ ತಂದೆ ತಾಯಿ ಇಬ್ಬರನ್ನು ಕಳೆದುಕೊಂಡಿರುವ 18 ವರ್ಷದೊಳಗಿನ ಮಕ್ಕಳಿಗೆ 18 ವರ್ಷ ತುಂಬುವವರೆಗೂ ತಿಂಗಳಿಗೆ ರೂ.3500/- ನೀಡುವುದು.<br>➢ ಕೋವಿಡ್-19 ಕಾರಣದಿಂದ ಪೋಷಕರಿಬ್ಬರನ್ನೂ ಕಳೆದುಕೊಂಡ ಎಸ್.ಎಸ್.ಎಲ್.ಸಿ ಪೂರೈಸಿದ ಮಕ್ಕಳಿಗೆ ಉನ್ನತ ಶಿಕ್ಷಣ ಹಾಗೂ ಕೌಶಲ್ಯಾಭಿವೃದ್ಧಿಗಾಗಿ ಲ್ಯಾಪ್ ಟಾಪ್ ಮತ್ತು ಟ್ಯಾಬ್ ವಿತರಣೆ ಮಾಡುವುದು.<br>➢ ಕೋವಿಡ್-19 ಕಾರಣದಿಂದ ಪೋಷಕರಿಬ್ಬರನ್ನೂ ಕಳೆದುಕೊಂಡ ಹೆಣ್ಣು ಮಕ್ಕಳಿಗೆ 21 ವಯಸ್ಸು ತುಂಬಿದ ನಂತರ ವಿವಾಹ, ಉನ್ನತ ಶಿಕ್ಷಣ ಮತ್ತು ಸ್ವಯಂ ಉದ್ಯೋಗ ಉದ್ದೇಶಗಳಿಗಾಗಿ ತಲಾ ರೂ.1.00ಲಕ್ಷ ಆರ್ಥಿಕ ಧನ ಸಹಾಯ ನೀಡುವುದು.<br>**ಬಾಲ ಹಿತೈಷಿ ಯೋಜನೆಯ ಸೌಲಭ್ಯಗಳು:-**<br>❖ ರಾಜ್ಯದಲ್ಲಿ ಕೋವಿಡ್-19ರ ಕಾರಣದಿಂದ ಪೋಷಕರನ್ನೂ ಕಳೆದುಕೊಂಡು ವಿಸ್ತೃತ ಕುಟುಂಬ/ಏಕ ಪೋಷಕರ ನೆರವಿದ್ದರೂ ಸಹ ತಂದೆ/ತಾಯಿಯರನ್ನು ಕಳೆದುಕೊಂಡ 18 ವರ್ಷದೊಳಗಿನ ಮಕ್ಕಳಿಗೆ ನೈತಿಕ, ಭಾವನಾತ್ಮಕ ಮತ್ತು ಸಾಮಾಜಿಕ ನೆರವನ್ನು ಒದಗಿಸಿ ಅವರನ್ನು ಮಾನಸಿಕ ಆಘಾತದಿಂದ ಹೊರತರಲು ಹಾಗೂ ಮಗುವಿನ ಧೀರ್ಘಕಾಲಿಕ ಸಕಾರಾತ್ಮಾಕ ಬೆಳವಣಿಗೆಗೆ ಮತ್ತು ಸರ್ವೋತೋಮುಖ ಅಭಿವೃದ್ಧಿಗೆ ಅನುವಾಗುವಂತೆ ಈ ಯೋಜನೆಯನ್ನು ಜಾರಿಗೆ ತರಲಾಗಿದೆ. ಸಾಮಾಜಿಕ ಕಳಕಳಿಯಿರುವ ಯಾವುದೇ ಅರ್ಹ ವ್ಯಕ್ತಿ ಬಾಲ ಹಿತೈಷಿ (ಮಾರ್ಗದರ್ಶಕತ್ವ/ಮೆಂಟರ್ಶಿಪ್) ಪಡೆಯಬಹುದಾಗಿದೆ.<br>**ಯೋಜನೆಯ ಉದ್ದೇಶ:-**<br>❖ ಇಬ್ಬರು ಪೋಷಕರು ಅಥವಾ ಪೋಷಕರಲ್ಲಿ ಒಬ್ಬರನ್ನು ಕಳೆದುಕೊಮಡು ಆಘಾತಕ್ಕೆ ಒಳಗಾಗಿರುವ ಮತ್ತು ವಿಸ್ತೃತ ಕುಟುಂಬ/ಏಕಪೋಷಕರ ಆರೈಕೆಯಲ್ಲಿರುವ ಮಗುವಿಗೆ ನೈತಿಕ ಭಾವನಾತ್ಮಕ ಮತ್ತು ಇತರ ಅಗತ್ಯವಾದ ಬೆಂಬಲ ಮತ್ತು ಕಾಳಜಿಯನ್ನು ಒದಗಿಸುವುದು.<br>❖ ಕೊವಿಡ್-19 ರಿಂದ ಬಾಧಿತರಾದ ಮಕ್ಕಳಿಗೆ ಹಾಗೂ ಮಗುವಿನ ಬಗ್ಗೆ ಕಾಳಜಿ ಇರುವ ಒಬ್ಬ ಹಿತೈಷಿಗೆ ಪರಸ್ಪರ ಬಾಂಧವ್ಯವನ್ನು ಬೆಳಸುವ |

| | | |
|---|---|---|
| | | ಸಲುವಾಗಿ ಮತ್ತು ಹಿತೈಷಿಯಿಂದ ಮಗುವಿಗೆ ಮಾರ್ಗದರ್ಶನ ಒದಗಿಸುವುದು.<br>❖ ಈ ಮಕ್ಕಳ ಜೀವನದಲ್ಲಿ 18 ವರ್ಷ ಮತ್ತು ನಂತರದ ಅವಧಿಯಲ್ಲಿಯೂ ದೀರ್ಘಕಾಲೀನ ಸಕಾರಾತ್ಮಕ ಪರಿಣಾಮವನ್ನು ಉಂಟು ಮಾಡಲು, ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ತಮ್ಮ ಅತ್ಯುನ್ನತ ಸಾಮರ್ಥ್ಯವನ್ನು ಸಾಧಿಸಲು ಅವರಿಗೆ ಸಹಾಯ ಮಾಡುವುದು.<br>❖ ಸಮುದಾಯದ ಆಸಕ್ತಿಯನ್ನು ಸಜ್ಜುಗೊಳಿಸಲು ಮತ್ತು ಕೋವಿಡ್-19 ನಿಂದ ಬಾಧಿತ ಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳಿಗೆ ಸಾರ್ವಜನಿಕರನ್ನು ಸಂವೇದನಾಶೀಲಗೊಳಿಸುವುದು ಮತ್ತು ಮಕ್ಕಳ ಹಿತಾಸಕ್ತಿಗಳಿಗಾಗಿ ಅವರು ಯತ್ನಿಸುವಂತೆ ಮಾಡುವುದು.<br>**PM CARES for Children:-**<br>❖ ಕೋವಿಡ್-19 ಸಾಂಕ್ರಾಮಿಕದಿಂದ ದಿನಾಂಕ:11.03.2020ರ ನಂತರ ಇಬ್ಬರು ಪೋಷಕರನ್ನು/ಉಳಿದ ಪೋಷಕರನ್ನು (Surviving Parents)ನ್ನು/ಕಾನೂನು ಬದ್ಧ/ದತ್ತು ಪೋಷಕರನ್ನು ಕಳೆದುಕೊಂಡಿರುವ 18 ವರ್ಷದೊಳಗಿನ ಮಕ್ಕಳಿಗೆ ಪಾಲನೆ ಮತ್ತು ರಕ್ಷಣೆ ಒಳಗೊಂಡಂತೆ ಅವರ ಆರೋಗ್ಯ ವಿಮೆ, ಶಿಕ್ಷಣ ಮತ್ತು ಸಮಾಜದಲ್ಲಿ ಸ್ವಾವಲಂಬಿಗಳಾಗಿ ಜೀವನ ನಿರ್ವಹಿಸಲು ಅನುವಾಗುವಂತೆ ತಕ್ಷಣ ನೆರವು ಜೊತೆಗೆ ಪ್ರತೀ ಮಗುವಿಗೆ 23 ವರ್ಷ ತುಂಬಿದ ನಂತರ ತಲಾ ರೂ.10.00ಲಕ್ಷಗಳನ್ನು (ಹತ್ತು ಲಕ್ಷ ರೂ.ಗಳು) ನೀಡಲು ಸನ್ಮಾನ್ಯ ಪ್ರಧಾನ ಮಂತ್ರಿಗಳು "PM CARES for Children" ಎಂಬ ಹೊಸ ಯೋಜನೆಯನ್ನು ಘೋಷಿಸಿರುತ್ತಾರೆ. |
| ಆ) | ಕೋವಿಡ್-19 ವೈರಾಣು ಸೋಂಕಿನಿಂದ ದುಡಿಯುವ ಸದಸ್ಯರನ್ನು ಕಳೆದುಕೊಂಡ ಬಡತನ ರೇಖೆಗಿಂತ ಕೆಳಗಿರುವ (ಬಿ.ಪಿ.ಎಲ್) ಕುಟುಂಬಕ್ಕೆ ರಾಜ್ಯ ಸರ್ಕಾರ ತಲಾ 1 ಲಕ್ಷ ಪರಿಹಾರವನ್ನು ಘೋಷಿಸಿದ್ದು, ಈ ಸಂಬಂಧ ಪರಿಹಾರ ಕೋರಿ ಎಷ್ಟು ಅರ್ಜಿಗಳು ಸಲ್ಲಿಕೆಯಾಗಿದೆ; ಎಷ್ಟು ಕುಟುಂಬಗಳಿಗೆ ಪರಿಹಾರ ನೀಡಲಾಗಿದೆ; (ಸಂಪೂರ್ಣ ವಿವರ ಒದಗಿಸುವುದು) | ➢ ಕೋವಿಡ್ ನಿಂದ ಮೃತ ಹೊಂದಿದ ಬಿ.ಪಿ.ಎಲ್ ಕುಟುಂಬದ ದುಡಿಯುವ ವ್ಯಕ್ತಿಯ ಕುಟುಂಬಕ್ಕೆ ಪರಿಹಾರ ವಿತರಣೆಗೆ ಕುರಿತಂತೆ ರಾಜ್ಯದಲ್ಲಿ ಒಟ್ಟು: 7711 ಅರ್ಜಿಗಳು ಸ್ವೀಕೃತವಾಗಿದ್ದು, ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ.<br>➢ ಪರಿಹಾರ ಕೋರಿಕೆ ಅರ್ಜಿಗಳ ಕ್ಷೇತ್ರ ಪರಿಶೀಲನಾ ಕಾರ್ಯ ಪ್ರಗತಿಯಲ್ಲಿದ್ದು, ವರದಿ ಆಧಾರದ ಮೇಲೆ ಪರಿಹಾರ ವಿತರಿಸಲಾಗುವುದು. |
| ಇ) | ರಾಜ್ಯ ಸರ್ಕಾರ ಇಲಾಖೆಗಳಲ್ಲಿ ಕೋವಿಡ್-19 ಸೋಂಕು ನಿಯಂತ್ರಣ ಕಾರ್ಯಕ್ಕೆ ಗುತ್ತಿಗೆ/ಹೊರಗುತ್ತಿಗೆ ಆಧಾರದಲ್ಲಿ ನೇಮಕಗೊಂಡು ಕಾರ್ಯ ನಿರ್ವಹಿಸಿ ಸೋಂಕಿಗೆ ಬಲಿಯಾದವರ ಪ್ರಕರಣಗಳಲ್ಲಿ ಪರಿಹಾರ ಒದಗಿಸಲಾಗಿದೆಯೇ; (ಜಿಲ್ಲಾವಾರು ಸಂಪೂರ್ಣ ವಿವರ ನೀಡುವುದು). | |

ಸಂಖ್ಯೆ:ಮಮಇ 95 ಮಭಾಬ 2021

Halappa B.A

(ಆಚಾರ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು
ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಅನುಬಂಧ-1

Daily report on implementation of Bala Seva Scheme as on 13-09-2021

| Sl.No | Districts | No.of children who lost both parents due to covid after 1.03.2020 as per tentative information | Children in CCIs | Child eligible tentatively for RTGS under Bal Seva scheme. Column (3-4) | total no of children Orphaned due to covid 19 and received monthly Rs.3500 financial support through RTGS | Reasons for not paying the RTGS for the remaining Children in column 5 |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | BAGALKOT | 5 | 0 | 5 | 5 | 0 |
| 2 | BALLARI | 6 | 0 | 6 | 3 | 3 children file put up to DC office |
| 3 | BELAGAVI | 7 | 0 | 7 | 7 | 0 |
| 4 | BENGALURU RURAL | 0 | 0 | 0 | 0 | 0 |
| 5 | BENGALURU URBAN | 16 | 0 | 16 | 10 | 6 In Process |
| 6 | BIDAR | 6 | 0 | 6 | 6 | 0 |
| 7 | CHAMARAJANAGARA | 1 | 0 | 1 | 1 | 0 |
| 8 | CHIKBALLAPUR | 12 | 0 | 12 | 12 | 0 |
| 9 | CHIKKAMAGALURU | 5 | 0 | 5 | 5 | 0 |
| 10 | CHITRADURGA | 2 | 0 | 2 | 2 | 0 |
| 11 | DAKSHIN KANNADA | 5 | 0 | 5 | 5 | 0 |
| 12 | DAVANGERE | 2 | 0 | 2 | 2 | 0 |
| 13 | DHARWAD | 4 | 0 | 4 | 4 | - |
| 14 | GADAG | 5 | 0 | 5 | 5 | 0 |
| 15 | HASSAN | 6 | 0 | 6 | 6 | 0 |

| | | | | | | |
|---|---|---|---|---|---|---|
| 16 | HAVERI | 1 | 0 | 1 | 1 | 0 |
| 17 | KALABURAGI | 1 | 0 | 1 | 1 | 0 |
| 18 | KODAGU | 5 | 0 | 5 | 4 | 1 pending for approval in district level committee |
| 19 | KOLAR | 7 | 2 | 5 | 5 | 0 |
| 20 | KOPPAL | 3 | 0 | 3 | 3 | 0 |
| 21 | MANDYA | 3 | 0 | 3 | 3 | 0 |
| 22 | MYSURU | 4 | 0 | 4 | 4 | 0 |
| 23 | RAICHURU | 1 | 0 | 1 | 1 | 0 |
| 24 | RAMANAGARA | 4 | 0 | 4 | 2 | 2 pending for approval in district level committee |
| 25 | SHIVAMOGGA | 5 | 0 | 5 | 5 | - |
| 26 | TUMAKURU | 5 | 0 | 5 | 5 | - |
| 27 | UDUPI | 0 | 0 | 0 | 0 | 0 |
| 28 | UTTARA KANNADA | 0 | 0 | 0 | 0 | 0 |
| 29 | VIJAYAPURA | 2 | 0 | 2 | 2 | 0 |
| 30 | YADGIR | 6 | 0 | 6 | 6 | 0 |
| | **Total** | **129** | **2** | **127** | **115** | **12** |

ಯೋಜನಾ ನಿರ್ದೇಶಕರು, (ಪ್ರ)
ಮಕ್ಕಳ ರಕ್ಷಣಾ ನಿರ್ದೇಶನಾಲಯ,
ಬೆಂಗಳೂರು.

ಅನುಬಂಧ-2

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಸಿ.ಎಂ ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಪ್ರ.ಸಂ.300(461)ಕ್ಕೆ ಅನುಬಂಧ

| ಕ್ರ.ಸಂ | ಜಿಲ್ಲೆ | ಸ್ವೀಕೃತವಾದ ಅರ್ಜಿಗಳ ಸಂಖ್ಯೆ |
|---|---|---|
| 1 | ಬಾಗಲಕೋಟೆ | 38 |
| 2 | ಬಳ್ಳಾರಿ | 254 |
| 3 | ಬೆಂಗಳೂರು | 950 |
| 4 | ಬೆಳಗಾವಿ | 84 |
| 5 | ಬೆಂಗಳೂರು ನಗರ | 445 |
| 6 | ಬೀದರ್ | 212 |
| 7 | ಚಾಮರಾಜನಗರ | 235 |
| 8 | ಚಿಕ್ಕಬಳ್ಳಾಪುರ | 85 |
| 9 | ಚಿಕ್ಕಮಗಳೂರು | 18 |
| 10 | ಚಿತ್ರದುರ್ಗ | 181 |
| 11 | ದಕ್ಷಿಣ ಕನ್ನಡ | 137 |
| 12 | ದಾವಣಗೆರೆ | 240 |
| 13 | ಧಾರವಾಡ | 434 |
| 14 | ಗದಗ | 192 |
| 15 | ಹಾಸನ | 443 |
| 16 | ಹಾವೇರಿ | 196 |
| 17 | ಕಲ್ಬುರ್ಗಿ | 67 |
| 18 | ಕೊಡಗು | 160 |
| 19 | ಕೋಲಾರ | 396 |
| 20 | ಕೊಪ್ಪಳ | 633 |
| 21 | ಮಂಡ್ಯ | 399 |
| 22 | ಮೈಸೂರು | 783 |
| 23 | ರಾಯಚೂರು | 91 |
| 24 | ರಾಮನಗರ | 267 |
| 25 | ಶಿವಮೊಗ್ಗ | 146 |
| 26 | ತುಮಕೂರು | 317 |
| 27 | ಉಡುಪಿ | 20 |
| 28 | ಉತ್ತರಕನ್ನಡ | 155 |
| 29 | ವಿಜಯಪುರ | 73 |
| 30 | ಯಾದಗಿರಿ | 60 |
| ಒಟ್ಟು | | **7711** |